## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಸಣ್ಣ ನೀರಾವರಿ ಕಾಮಗಾರಿಗಳ ಅಂದಾಜು ಪಟ್ಟಿಗಳನ್ನು ಪರಿಶೀಲಿಸಲು ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಸನೀಇ 221 ಸನೀರಾ 99, ದಿನಾಂಕ: 15-5-2002.

2. ದಿನಾಂಕ: 17-4-2003 ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಮುಇಂ/ ಮಾನಿಸ/ ಸನೀರಾ/ ತಾಸ-4/ 2003-04/ 1020 ಮತ್ತು 3015, ದಿನಾಂಕ: ಇಲ್ಲ.

**ಪ್ರಸ್ತಾವನೆ:**

ಸಣ್ಣ ನೀರಾವರಿ ಕಾಮಗಾರಿಗಳ 30.00 ಲಕ್ಷ ರೂ.ಗಳ ಹಾಗೂ ಹೆಚ್ಚಿನ ಅಂದಾಜುಳ್ಳ ಪ್ರಸ್ತಾವನೆಗಳನ್ನು ತಾಂತ್ರಿಕವಾಗಿ ಪರಿಶೀಲಿಸುವ ಸಲುವಾಗಿ ಮೇಲೆ (1) ರಲ್ಲಿ ಓದಲಾದ ದಿನಾಂಕ: 15-5-2002ರ ಸರ್ಕಾರಿ ಆದೇಶದಲ್ಲಿ ಪುನರ್ ರಚಿಸಲಾಗಿದ್ದ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯ ಕಾಲಾವಧಿಯು ದಿನಾಂಕ: 14-5-2003ಕ್ಕೆ ಅಂತ್ಯಗೊಂಡಿರುತ್ತದೆ.

ಮೇಲೆ (2)ರಲ್ಲಿ ಓದಲಾದ ಮುಖ್ಯ ಅಭಿಯಂತರರು, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ಪತ್ರದಲ್ಲಿ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯ ಕಾಲಾವಧಿಯು ಮುಕ್ತಾಯಗೊಂಡಿರುವುದರಿಂದ ಸಮಿತಿಯನ್ನು ಪುನರ್ ರಚಿಸಿ ಮುಂದುವರೆಸಿ ಸರ್ಕಾರದ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 51 ಮಸಾವಿ 2003 (ಭಾಗ), ಬೆಂಗಳೂರು, ದಿನಾಂಕ: 6ನೇ ಡಿಸೆಂಬರ್ 2003**

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)ಯ 30.00 ಲಕ್ಷ ರೂ.ಗಳ ಹಾಗೂ ಹೆಚ್ಚಿನ ಅಂದಾಜುಳ್ಳ ಕಾಮಗಾರಿಗಳ ಪ್ರಸ್ತಾವನೆಗಳನ್ನು ತಾಂತ್ರಿಕವಾಗಿ ಪರಿಶೀಲಿಸುವ ಸಲುವಾಗಿ ಈ ಕೆಳಕಂಡ ಸದಸ್ಯರುಗಳನ್ನೊಳಗೊಂಡ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯನ್ನು ಪುನರ್ ರಚಿಸಲಾಗಿದೆ. ಈ ಪುನರ್ ರಚಿತ ಸಮಿತಿಯ ಕಾಲಾವಧಿಯು ಈ ಆದೇಶ ಹೊರಡಿಸಿದ ದಿನಾಂಕದಿಂದ ಒಂದು ವರ್ಷದವರೆಗೆ ಇರುತ್ತದೆ.

**ಅಧಿಕಾರೇತರ ಸದಸ್ಯರು:**

| | | |
|---|---|---|
| 1. | ಶ್ರೀ ಸಿ. ಎನ್. ಬಾಬು, ನಿವೃತ್ತ ಮುಖ್ಯ ಇಂಜಿನಿಯರ್ | ಅಧ್ಯಕ್ಷರು |
| 2. | ಶ್ರೀ ಎಸ್. ಎಸ್. ಪ್ರಸಾದ್, ಪ್ರಧಾನ ಇಂಜಿನಿಯರ್ (ನಿವೃತ್ತ) | ಸದಸ್ಯರು |
| 3. | ಶ್ರೀ ಎಸ್. ಆರ್. ರಂಗಯ್ಯ, ಸಹಕಾರ ಸಂಘಗಳ ಅಪರ ನಿಬಂಧಕರು (ನಿವೃತ್ತ) | ಸದಸ್ಯರು |
| 4. | ಪ್ರೊ. ರಾಮಪ್ರಸಾದ್, ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು | ಸದಸ್ಯರು |
| 5. | ಶ್ರೀ ಎನ್. ಗೋಪಾಲಸ್ವಾಮಿ, ನಿವೃತ್ತ ವಿಶೇಷಾಧಿಕಾರಿಗಳು, ಲೋಕೋಪಯೋಗಿ ಇಲಾಖೆ (ಆರ್ಥಿಕ ಕೋಶ) | ಸದಸ್ಯರು |
| 6. | ಶ್ರೀ ಎನ್. ರಾಜಗೋಪಾಲ್, ನಿವೃತ್ತ ಅಧೀಕ್ಷಕ ಇಂಜಿನಿಯರ್ | ಸದಸ್ಯರು |
| 7. | ಶ್ರೀ ಟಿ. ತಿಮ್ಮಯ್ಯ, ಪ್ರಧಾನ ಇಂಜಿನಿಯರ್ (ನಿವೃತ್ತ) | ಸದಸ್ಯರು |
| 8. | ಶ್ರೀ ಬಿ. ಎಸ್. ಭವಾನಿ ಶಂಕರ್, ಮುಖ್ಯ ಇಂಜಿನಿಯರ್ (ನಿವೃತ್ತ) | ಸದಸ್ಯರು |

**ಅಧಿಕಾರಿ ಸದಸ್ಯರು:**

| | | |
|---|---|---|
| 1. | ಪ್ರಧಾನ ಇಂಜಿನಿಯರ್, ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ | ಸದಸ್ಯರು |
| 2. | ನಿರ್ದೇಶಕರು, ಕರ್ನಾಟಕ ಇಂಜಿನಿಯರಿಂಗ್ ಸಂಶೋಧನಾ ಕೇಂದ್ರ, ಕೃಷ್ಣರಾಜಸಾಗರ, ಮಂಡ್ಯ ಜಿಲ್ಲೆ | ಸದಸ್ಯರು |
| 3. | ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ಆರ್ಥಿಕ ಕೋಶ), ವಿಧಾನಸೌಧ | ಸದಸ್ಯರು |
| 4. | ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ | ಸದಸ್ಯರು |
| 5. | ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು | ಸದಸ್ಯ ಕಾರ್ಯದರ್ಶಿಗಳು |

ಈ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರಿ ಆದೇಶ ಸಂಖ್ಯೆ: ಆಇ 2 ಸನಿತಿ 99, ದಿನಾಂಕ: 22-4-99ರಂತೆ ಪ್ರಯಾಣ ಭತ್ಯೆ, ಉಪಸ್ಥಿತಿ ಭತ್ಯೆ ಹಾಗೂ ದಿನ ಭತ್ಯೆ ಪಡೆಯಲು ಅರ್ಹರಾಗಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1534

**ಪಿ. ಜಿ. ಪ್ರಸಾದ್**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## RURAL DEVELOPMENT & PANCHAYAT RAJ SECRETARIAT

**SUB:** Release of SGSY I instalment of State share (25% of the allocation) to 6 Districts for the year 2003-2004.

**READ:** (1) GOI Ltr. No. 17013 /10/2002-SGSY-III (19) dated: 16-6-03.

(2) State Government Order No. RDP 30 SJY 2003, Bangalore, Dated: 06-08-2003.

**PREAMBLE:**

Government of India has released Rs. 1600.47 lakhs to all districts in the State. Accordingly State Government has to release Rs. 533.49 lakhs but due to inadequate amount in the budget for the year

2003-2004 State had released Rs. 420.68 lakhs only to 22 districts as its I instalment. The Finance Department has agreed to release Rs. 112.81 lakhs as additional amount to 6 districts. Hence this Order.

**Government Order No: RDP 30 SJY 2003, Bangalore, Dated: 29th November 2003**

The State Government accords sanction for the release of I instalment of Rs. 112.81 lakhs (Rs. One Crore twelve lakh and eighty one thousand only) to 6 Zilla Panchayats subject to the following conditions:

**(Rs. in lakhs)**

| Sl. No | Name of the Zilla Panchayat | Total Central share released | Total State share released |
|---|---|---|---|
| 1. | Bijapur | 57.74 | 19.24 |
| 2. | Gulbarga | 104.88 | 34.96 |
| 3. | Hassan | 67.67 | 22.55 |
| 4. | Kodagu | 40.37 | 13.46 |
| 5. | Mandya | 64.56 | 21.52 |
| 6. | Belgaum *** | 124.15 | 1.08 |
| | **Total** | **459.37** | **112.81** |

(***- Short State share of Rs. 1.08 lakhs is being released now. (Central Share of Rs. 124.15 lakhs, State Share released Rs. 40.30 lakhs instead of Rs. 41.38 lakhs).

The amount should be utilised for the implementation of SGSY as per the guidelines of the SGSY Manual May 1999. The release to the implementing agency is to be made at any date within 15 days of the receipt of this G. O. without fail.

The funding pattern will be 75:25 between the Centre and the State.

The expenditure on the scheme is debitable to the Head of Account 2501-Spl. Programmes for Rural Development 01- Integrated Rural Development programmes 196 Assistance to Zilla Panchayats 1- Zilla Panchayats -07 Swarna Jayanthi Grama Swarozgar Yojana -201-Grant in Aid for ZP- Plan 2003-2004 (501-01-196-1-07-201).

The Chief Accounts Officers of the concerned Zilla Panchayats are authorised to draw the amount as per rules.

The Deputy Secretaries (Dev)/ Project Directors of concerned Zilla Panchayats should submit approved annual plan for 2003-2004.

The Monthly progress reports of Physical and Financial achievement should be sent to the Deputy Director (SEP), Rural Development and Panchayat Raj Department on the 10th of every succeeding month.

The Chief Accounts Officers of the concerned Zilla Panchayats shall send the Audited Statement of accounts and utilisation certificate to the Director (SEP), & E/o Deputy Secretary to Government, Rural Development & Panchayat Raj Dept.

This Order is issued with the concurrence of the F. D. No. 2282 Exp. 6: 2003, Dated: 28-11-2003 and Unique No. 86 Dtd: 29-11-2003 of R & I, RDPR Dept.

By order and in the name of the Governor of Karnataka,

P. R. 1535

**B. B. MALLESHA**

Director (SEP) & E/ o Deputy Secretary to Government,

Rural Development & Panchayat Raj Department.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಗ್ರಾಮೀಣ ಕೃಪಾಂಕದ ಹಿನ್ನೆಲೆಯಲ್ಲಿ ಆಯ್ಕೆಯಾದ ಸಹಾಯಕ ಎಂಟಮಾಲಜಿಸ್ಟ್‌ರನ್ನು ಸೇವೆಯಿಂದ ತೆಗೆದುಹಾಕುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಆಕುಕ 294 ಸಿಜಿಇ 2000, ದಿನಾಂಕ: 20-6-2001.
2. ಸರ್ಕಾರಿ ಸುತ್ತೋಲೆ ಸಂಖ್ಯೆ: ಸಿಆಸುಇ 45 ಸೇನನಿ 2003, ದಿನಾಂಕ: 2-7-2003.
3. ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಆಸುಇ 58 ಎಸ್‌ಆರ್‌ಆರ್ 2003, ದಿನಾಂಕ: 12-11-2003.
4. ಇಲಾಖಾ ನೇಮಕಾತಿ ಸಮಿತಿ, ಆಕುಕ ಸೇವೆಗಳು ಬೆಂಗಳೂರು, ಇವರ ಪತ್ರ ಸಂಖ್ಯೆ: ಡಿಆರ್‌ಸಿ 8 (1) 2003-04, ದಿನಾಂಕ: 14-10-2003.

**ಪ್ರಸ್ತಾವನೆ:**

ರಾಜ್ಯ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳ ನೇರ ನೇಮಕಾತಿಯಲ್ಲಿ ಗ್ರಾಮೀಣ ಅಭ್ಯರ್ಥಿಗಳಿಗೆ ಶೇಕಡಾ ಹತ್ತರಷ್ಟು ಕೃಪಾಂಕ ನೀಡಲು ಕರ್ನಾಟಕ ಸಿವಿಲ್ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 3 (ಬಿ)ರಲ್ಲಿ ಅವಕಾಶ ಕಲ್ಪಿಸಲಾಗಿತ್ತು. ಈ ನಿಯಮದಡಿಯಲ್ಲಿ ಕ್ರಮಾಂಕ (1)ರಲ್ಲಿ ಓದಲಾದ ಸರ್ಕಾರಿ ಅಧಿಸೂಚನೆಯಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯಲ್ಲಿ ಇತರರೊಂದಿಗೆ 16 ಸಹಾಯಕ ಎಂಟಮಾಲಜಿಸ್ಟ್ ಹುದ್ದೆಯಲ್ಲಿ ನೇಮಕಾತಿ ಮಾಡಲಾಗಿತ್ತು. ನಿಯಮ 3 (ಬಿ) ಯನ್ನು ಕರ್ನಾಟಕ ಉಚ್ಚ ನ್ಯಾಯಾಲಯ ಮತ್ತು ಭಾರತದ ಸರ್ವೋಚ್ಛ ನ್ಯಾಯಾಲಯದಲ್ಲಿ ಪ್ರಶ್ನಿಸಿದ್ದು, ಈ ನ್ಯಾಯಾಲಯಗಳು ನೀಡಿರುವ

ತೀರ್ಪುಗಳ ಹಿನ್ನೆಲೆಯಲ್ಲಿ ಸರ್ಕಾರವು ಉಲ್ಲೇಖ (2)ರಲ್ಲಿ ಓದಲಾದ ದಿನಾಂಕ: 2-7-2003ರಂದು ಹೊರಡಿಸಲಾದ ಸುತ್ತೋಲೆಯಲ್ಲಿ ಈ ಕೆಳಕಂಡಂತೆ ಕ್ರಮ ಜರುಗಿಸಲು ಸೂಚಿಸಿತ್ತು.

ಎ. ದಿನಾಂಕ: 11-11-1998 ರ ನಂತರ ಗ್ರಾಮೀಣ ಕೃಪಾಂಕದ ಸೌಲಭ್ಯದೊಂದಿಗೆ ನೇಮಕಾತಿ (appointment) ಹೊಂದಿರುವ ಎಲ್ಲಾ ಅಭ್ಯರ್ಥಿಗಳ ಆಯ್ಕೆ ಪಟ್ಟಿಗಳನ್ನು ಗ್ರಾಮೀಣ ಕೃಪಾಂಕ ರಹಿತವಾಗಿ ಪರಿಷ್ಕರಿಸಿ, ಪರಿಷ್ಕೃತ ಆಯ್ಕೆ ಪಟ್ಟಿಗಳನ್ನು ಪ್ರಕಟಿಸಲು ಕ್ರಮ ತೆಗೆದುಕೊಳ್ಳತಕ್ಕದ್ದು;

ಬಿ. ಪರಿಷ್ಕೃತ ಆಯ್ಕೆ ಪಟ್ಟಿಯಲ್ಲಿ ಸ್ಥಾನ ಪಡೆಯಲಾದ ಅಭ್ಯರ್ಥಿಗಳನ್ನು ಸೇವೆಯಿಂದ ತೆಗೆದುಹಾಕಲು ಕ್ರಮ ತೆಗೆದುಕೊಳ್ಳತಕ್ಕದ್ದು.

ಸಿ. ಪರಿಷ್ಕೃತ ಆಯ್ಕೆ ಪಟ್ಟಿಯಲ್ಲಿ ಹೊಸದಾಗಿ ಸೇರ್ಪಡೆಯಾದ ಅಭ್ಯರ್ಥಿಗಳನ್ನು ಸೇವೆಯಿಂದ ತೆಗೆದುಹಾಕಿದ ಅಭ್ಯರ್ಥಿಗಳ ಸ್ಥಾನದಲ್ಲಿ ಭವಿಷ್ಯವರ್ತಿಯಾಗಿ ಜಾರಿಗೆ ಬರುವಂತೆ ನೇಮಕಾತಿ ಮಾಡಲು ಕ್ರಮ ತೆಗೆದುಕೊಳ್ಳತಕ್ಕದ್ದು.

ಮೇಲಿನ ಸೂಚನೆ 'ಎ' ರಂತೆ ದಿನಾಂಕ: 11-11-98ರ ನಂತರ ಗ್ರಾಮೀಣ ಕೃಪಾಂಕದ ಸೌಲಭ್ಯದೊಂದಿಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯಲ್ಲಿ ಸಹಾಯಕ ಎಂಟಮಾಲಜಿಸ್ಟ್ ರವರುಗಳ ಆಯ್ಕೆ ಪಟ್ಟಿಯನ್ನು ಪರಿಷ್ಕರಿಸಿ, ಸೂಚನೆ 'ಬಿ' ರಂತೆ ಮೇಲೆ ಓದಲಾದ ಕ್ರಮಾಂಕ (4)ರಲ್ಲಿ ಆಯ್ಕೆ ಪ್ರಾಧಿಕಾರವು 16 ಅಭ್ಯರ್ಥಿಗಳನ್ನು ಆಯ್ಕೆಪಟ್ಟಿಯಿಂದ ತೆಗೆದುಹಾಕಲಾಗಿದೆ. ಸೂಚನೆ 'ಸಿ'ರಂತೆ ತೆಗೆದುಹಾಕಲಾಗಿರುವ ಅಭ್ಯರ್ಥಿಗಳ ಸ್ಥಾನದಲ್ಲಿ ಹೊಸದಾಗಿ ಆಯ್ಕೆ ಪಟ್ಟಿಯಲ್ಲಿ ಸೇರ್ಪಡೆಯಾದ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ಹೊರಡಿಸುವ ಪ್ರಕ್ರಿಯೆ ಜಾರಿಯಲ್ಲಿದೆ.

ಮೇಲೆ ಕ್ರಮಾಂಕ (3)ರಲ್ಲಿ ಓದಲಾಗಿರುವ ಅಧಿಸೂಚನೆಯಂತೆ ಗ್ರಾಮೀಣ ಕೃಪಾಂಕದಲ್ಲಿ ನೇಮಕಾತಿ ಹೊಂದಿರುವ ಸಹಾಯಕ ಎಂಟಮಾಲಜಿಸ್ಟ್‌ರವರಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ ತೀರ್ಮಾನಿಸಿ, ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 939 ಹೆಚ್‌ಎಸ್‌ಹೆಚ್ 2003 (1) ಬೆಂಗಳೂರು, ದಿನಾಂಕ: 18ನೇ ಡಿಸೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಈ ಆದೇಶಕ್ಕೆ ಲಗತ್ತಿಸಿದ ಅನುಬಂಧದಲ್ಲಿ ತಿಳಿಸಿರುವ ಗ್ರಾಮೀಣ ಕೃಪಾಂಕ ದಡಿಯಲ್ಲಿ ಆಯ್ಕೆಯಾಗಿ ನೇಮಕಾತಿ ಹೊಂದಿದ ಸಹಾಯಕ ಎಂಟಮಾಲಜಿಸ್ಟ್‌ರವರುಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ತೆಗೆದುಹಾಕಲಾಗಿದೆ. (Discharged)

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕಾಶೀನಾಥ ಪಟವಾಡಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ 939 ಹೆಚ್‌ಎಸ್‌ಹೆಚ್ 2003, (1) ದಿನಾಂಕ: 18ನೇ ಡಿಸೆಂಬರ್ 2003ಕ್ಕೆ**

**ಅನುಬಂಧ**

**ಸಹಾಯಕ ಎಂಟಮಾಲಜಿಸ್ಟ್‌ರ ಪಟ್ಟಿ**

| ಕ್ರ. ಸಂ | ಸಹಾಯಕ ಎಂಟಮಾಲಜಿಸ್ಟ್ ಇವರ ಹೆಸರು | ಕೆಲಸ ನಿರ್ವಹಿಸುತ್ತಿರುವ ಸ್ಥಳ |
|---|---|---|
| 1 | 2 | 3 |
| | **ಶ್ರೀ: ಶ್ರೀಮತಿ** | |
| 1. | ರಾಜೇಶ್ ಕುಲಕರ್ಣಿ | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಕಚೇರಿ, ಕೊಪ್ಪಳ |
| 2. | ಶ್ರೀಕಾಂತ್ ಪಾಟೀಲ್ | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಕಚೇರಿ, ಬೆಂಗಳೂರು ನಗರ ಜಿಲ್ಲೆ |
| 3. | ಕಿರಣ್ ಎಸ್. ಅಂಬಾಲಿ | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಕಛೇರಿ, ಧಾರವಾಡ |
| 4. | ಮಂಜುನಾಥ ಟಿ. ಪಿ. | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಕಛೇರಿ, ಚಿತ್ರದುರ್ಗಾ |
| 5. | ಮಹದೇವ್ | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಕಛೇರಿ, ಗುಲ್ಬರ್ಗಾ |
| 6. | ಸವಿತಾ ಕೆ.ಎನ್. | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಕಛೇರಿ, ಹಾಸನ |
| 7. | ನಂದಿನಿ ಕಡಿ | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಕಛೇರಿ, ಗದಗ್ |
| 8. | ಸುನಂದ ಎಂ. | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಕಛೇರಿ, ಚಿಕ್ಕಮಗಳೂರು |
| 9. | ಇಂದಿರಾ ಪಾಟೀಲ್ | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಕಛೇರಿ, ಹಾವೇರಿ |
| 10. | ಗಣಚಾರಿ ಶಿವರಾಜ್ | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಕಛೇರಿ, ಬಾಗಲಕೋಟೆ |
| 11. | ಶ್ರೀನಿವಾಸ್ ಎಂ. | ಇ. ಡಿ. ಆಸ್ಪತ್ರೆ, ಹಳೆ ಮದ್ರಾಸ್ ರಸ್ತೆ, ಬೆಂಗಳೂರು |
| 12. | ರಿಯಾಜ್ ದೇವಳ್ಳಿ | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಕಛೇರಿ, ಬಿಜಾಪುರ |
| 13. | ಗಣಪತಿ ಎನ್. ಬಿ. | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಕಛೇರಿ, ಕೋಲಾರ |

| 1 | 2 | 3 |
|---|---|---|
| 14. | ಮಂಜುನಾಥ ಜೆ. ಎಸ್. | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಕಛೇರಿ, ಮಡಿಕೇರಿ |
| 15. | ರೇಖಾ | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಕಛೇರಿ, ಚಾಮರಾಜನಗರ |
| 16. | ಪೃಥ್ವಿರಾಜ್ ಹೆಚ್. ಎಸ್. | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಕಛೇರಿ, ತುಮಕೂರು |

**ಕಾಶೀನಾಥ ಪಟವಾಡಿ**

ಪಿ. ಆರ್. 1536 ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ವಿಷಯ:** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಗ್ರಾಮೀಣ ಕೃಪಾಂಕದ ಹಿನ್ನೆಲೆಯಲ್ಲಿ ಆಯ್ಕೆಯಾದ ದಂತ ಆರೋಗ್ಯಾಧಿಕಾರಿಗಳನ್ನು ಸೇವೆಯಿಂದ ತೆಗೆದುಹಾಕುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಆಕುಕ 2 ಹೆಚ್‌ಎಸ್‌ಡಿ 2000, ದಿನಾಂಕ: 26-8-2000.
2. ಸರ್ಕಾರಿ ಸುತ್ತೋಲೆ ಸಂಖ್ಯೆ: ಸಿಆಸುಇ 45 ಸೇನನಿ 2003, ದಿನಾಂಕ: 2-7-2003.
3. ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಆಸುಇ 58 ಎಸ್‌ಆರ್‌ಆರ್ 2003, ದಿನಾಂಕ: 12-11-2003.
4. ಇಲಾಖಾ ನೇಮಕಾತಿ ಸಮಿತಿ, ಆಕುಕ ಸೇವೆಗಳು ಬೆಂಗಳೂರು, ಇವರ ಪತ್ರ ಸಂಖ್ಯೆ: ಡಿಆರ್‌ಸಿ 9, 2003-04, ದಿನಾಂಕ: 9-12-2003.

**ಪ್ರಸ್ತಾವನೆ:**

ರಾಜ್ಯ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳ ನೇರ ನೇಮಕಾತಿಯಲ್ಲಿ ಗ್ರಾಮೀಣ ಅಭ್ಯರ್ಥಿಗಳಿಗೆ ಶೇಕಡಾ ಹತ್ತರಷ್ಟು ಕೃಪಾಂಕ ನೀಡಲು ಕರ್ನಾಟಕ ಸಿವಿಲ್ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 3 (ಬಿ)ರಲ್ಲಿ ಅವಕಾಶ ಕಲ್ಪಿಸಲಾಗಿತ್ತು. ಈ ನಿಯಮದಡಿಯಲ್ಲಿ ಕ್ರಮಾಂಕ (1)ರಲ್ಲಿ ಓದಲಾದ ಸರ್ಕಾರಿ ಅಧಿಸೂಚನೆಯಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯಲ್ಲಿ ಇತರರೊಂದಿಗೆ 39 ದಂತ ಆರೋಗ್ಯಾಧಿಕಾರಿಗಳ ಹುದ್ದೆಯಲ್ಲಿ ನೇಮಕಾತಿ ಮಾಡಲಾಗಿತ್ತು. ನಿಯಮ 3 (ಬಿ) ಯನ್ನು ಕರ್ನಾಟಕ ಉಚ್ಚ ನ್ಯಾಯಾಲಯ ಮತ್ತು ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿ ಪ್ರಶ್ನಿಸಿದ್ದು, ಈ ನ್ಯಾಯಾಲಯಗಳು ನೀಡಿರುವ ತೀರ್ಪುಗಳ ಹಿನ್ನೆಲೆಯಲ್ಲಿ ಸರ್ಕಾರವು ಉಲ್ಲೇಖ (2)ರಲ್ಲಿ ಓದಲಾದ ದಿನಾಂಕ: 2-7-2003ರಂದು ಹೊರಡಿಸಲಾದ ಸುತ್ತೋಲೆಯಲ್ಲಿ ಈ ಕೆಳಕಂಡಂತೆ ಕ್ರಮ ಜರುಗಿಸಲು ಸೂಚಿಸಿತ್ತು.

ಎ. ದಿನಾಂಕ: 11-11-1998 ರ ನಂತರ ಗ್ರಾಮೀಣ ಕೃಪಾಂಕದ ಸೌಲಭ್ಯದೊಂದಿಗೆ ನೇಮಕಾತಿ (appointment) ಹೊಂದಿರುವ ಎಲ್ಲಾ ಅಭ್ಯರ್ಥಿಗಳ ಆಯ್ಕೆ ಪಟ್ಟಿಗಳನ್ನು ಗ್ರಾಮೀಣ ಕೃಪಾಂಕ ರಹಿತವಾಗಿ ಪರಿಷ್ಕರಿಸಿ, ಪರಿಷ್ಕೃತ ಆಯ್ಕೆ ಪಟ್ಟಿಗಳನ್ನು ಪ್ರಕಟಿಸಲು ಕ್ರಮ ತೆಗೆದುಕೊಳ್ಳತಕ್ಕದ್ದು;

ಬಿ. ಪರಿಷ್ಕೃತ ಆಯ್ಕೆ ಪಟ್ಟಿಯಲ್ಲಿ ಸ್ಥಾನ ಪಡೆಯಲಾದ ಅಭ್ಯರ್ಥಿಗಳನ್ನು ಸೇವೆಯಿಂದ ತೆಗೆದುಹಾಕಲು ಕ್ರಮ ತೆಗೆದುಕೊಳ್ಳತಕ್ಕದ್ದು.

ಸಿ. ಪರಿಷ್ಕೃತ ಆಯ್ಕೆ ಪಟ್ಟಿಯಲ್ಲಿ ಹೊಸದಾಗಿ ಸೇರ್ಪಡೆಯಾದ ಅಭ್ಯರ್ಥಿಗಳನ್ನು ಸೇವೆಯಿಂದ ತೆಗೆದುಹಾಕಿದ ಅಭ್ಯರ್ಥಿಗಳ ಸ್ಥಾನದಲ್ಲಿ ಭವಿಷ್ಯವರ್ತಿಯಾಗಿ ಜಾರಿಗೆ ಬರುವಂತೆ ನೇಮಕಾತಿ ಮಾಡಲು ಕ್ರಮ ತೆಗೆದುಕೊಳ್ಳತಕ್ಕದ್ದು.

ಮೇಲಿನ ಸೂಚನೆ 'ಎ' ರಂತೆ ದಿನಾಂಕ: 11-11-98ರ ನಂತರ ಗ್ರಾಮೀಣ ಕೃಪಾಂಕದ ಸೌಲಭ್ಯದೊಂದಿಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯಲ್ಲಿ ದಂತ ಆರೋಗ್ಯಾಧಿಕಾರಿಗಳ ಆಯ್ಕೆ ಪಟ್ಟಿಯನ್ನು ಪರಿಷ್ಕರಿಸಿ, ಸೂಚನೆ 'ಬಿ' ರಂತೆ ಮೇಲೆ ಓದಲಾದ ಕ್ರಮಾಂಕ (4)ರಲ್ಲಿ ಆಯ್ಕೆ ಪ್ರಾಧಿಕಾರವು 39 ಅಭ್ಯರ್ಥಿಗಳನ್ನು ಆಯ್ಕೆಪಟ್ಟಿಯಿಂದ ತೆಗೆದುಹಾಕಲಾಗಿದೆ. ಸೂಚನೆ 'ಸಿ'ರಂತೆ ತೆಗೆದುಹಾಕಲಾಗಿರುವ ಅಭ್ಯರ್ಥಿಗಳ ಸ್ಥಾನದಲ್ಲಿ ಹೊಸದಾಗಿ ಆಯ್ಕೆ ಪಟ್ಟಿಯಲ್ಲಿ ಸೇರ್ಪಡೆಯಾದ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ಹೊರಡಿಸುವ ಪ್ರಕ್ರಿಯೆ ಜಾರಿಯಲ್ಲಿದೆ.

ಮೇಲೆ ಕ್ರಮಾಂಕ (3)ರಲ್ಲಿ ಓದಲಾಗಿರುವ ಅಧಿಸೂಚನೆಯಂತೆ ಗ್ರಾಮೀಣ ಕೃಪಾಂಕದಲ್ಲಿ ನೇಮಕಾತಿ ಹೊಂದಿರುವ ವೈದ್ಯರುಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ ತೀರ್ಮಾನಿಸಿ, ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 939 ಹೆಚ್‌ಎಸ್‌ಹೆಚ್ 2003 ಬೆಂಗಳೂರು, ದಿನಾಂಕ: 17ನೇ ಡಿಸೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಈ ಆದೇಶಕ್ಕೆ ಲಗತ್ತಿಸಿದ ಅನುಬಂಧದಲ್ಲಿ ತಿಳಿಸಿರುವ ಗ್ರಾಮೀಣ ಕೃಪಾಂಕ ದಡಿಯಲ್ಲಿ ಆಯ್ಕೆಯಾಗಿ ನೇಮಕಾತಿ ಹೊಂದಿದ ದಂತ ಆರೋಗ್ಯಾಧಿಕಾರಿಯವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ತೆಗೆದುಹಾಕಲಾಗಿದೆ. (Discharged)

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕಾಶೀನಾಥ ಪಟವಾಡಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ 939 ಹೆಚ್‌ಎಸ್‌ಹೆಚ್ 2003 ದಿನಾಂಕ: 18ನೇ ಡಿಸೆಂಬರ್ 2003ಕ್ಕೆ ಅನುಬಂಧ**

| ಕ್ರ. ಸಂ | ದಂತ ಆರೋಗ್ಯಾಧಿಕಾರಿ ಹೆಸರು ಮತ್ತು ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ |
|---|---|
| 1. | ಡಾ: ಸಮೀರ್ ಸಿ. ಎಂ., ಸಾರ್ವಜನಿಕ ಆಸ್ಪತ್ರೆ, ವೀರಾಜಪೇಟೆ, ಮಡಿಕೇರಿ. |
| 2. | ಡಾ: ಕೇಶವ ಉಪೇಂದ್ರ ಭಟ್, ಸಾರ್ವಜನಿಕ ಆಸ್ಪತ್ರೆ, ಸಿರ್ಸಿ, ಕಾರವಾರ, ಉ. ಕ. ಜಿಲ್ಲೆ. |
| 3. | ಡಾ: ಶ್ರೀಕಾಂತ್, ಸಾರ್ವಜನಿಕ ಆಸ್ಪತ್ರೆ, ಮಾಗಡಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ. |

| | |
|---|---|
| 4. | ಡಾ: ನಾಗೇಂದ್ರಗುಪ್ತ ವಿ. ಆರ್., ಸಾರ್ವಜನಿಕ ಆಸ್ಪತ್ರೆ, ಚಿಕ್ಕಬಳ್ಳಾಪುರ, ಕೋಲಾರ ಜಿಲ್ಲೆ |
| 5. | ಡಾ: ವೀರಾ ರೆಡ್ಡಿ, ವಿಮ್ಸ್, ಬಳ್ಳಾರಿ, (ಜಿಲ್ಲಾ ಆಸ್ಪತ್ರೆ, ಬಳ್ಳಾರಿ) |
| 6. | ಡಾ: ರವಿ ಎಂ. ಜಿ. ಸಾರ್ವಜನಿಕ ಆಸ್ಪತ್ರೆ, ಅಂಕೋಲ, ಕಾರವಾರ |
| 7. | ಡಾ: ಜಯದೀಪ್ ಎನ್. ಎ. ಸಾರ್ವಜನಿಕ ಆಸ್ಪತ್ರೆ, ಬಂಟ್ವಾಳ, ದಕ್ಷಿಣ ಕನ್ನಡ ಜಿಲ್ಲೆ |
| 8. | ಡಾ: ಜಿ.ಎಸ್. ವೇಣುಗೋಪಾಲ, ಸಾರ್ವಜನಿಕ ಆಸ್ಪತ್ರೆ, ಚಿಂತಾಮಣಿ, ಕೋಲಾರ ಜಿಲ್ಲೆ |
| 9. | ಡಾ: ನಾರಾಯಣ ರೆಡ್ಡಿ, ಸಾರ್ವಜನಿಕ ಆಸ್ಪತ್ರೆ, ಚಳ್ಳಕೆರೆ, ಚಿತ್ರದುರ್ಗ ಜಿಲ್ಲೆ. |
| 10. | ಡಾ: ಹೇಮಲತ ಬಿ. ಆರ್., ಸಾರ್ವಜನಿಕ ಆಸ್ಪತ್ರೆ, ಗುಬ್ಬಿ, ತುಮಕೂರು ಜಿಲ್ಲೆ |
| 11. | ಡಾ: ಮಂಜುನಾಥ ಬಿ. ಕೆ., ಸಾರ್ವಜನಿಕ ಆಸ್ಪತ್ರೆ, ಸಿರಾ, ತುಮಕೂರು ಜಿಲ್ಲೆ |
| 12. | ಡಾ: ಸಮಿವುಲ್ಲಾ ಷರೀಫ್ ಎಸ್. ಎ., ಸಾರ್ವಜನಿಕ ಆಸ್ಪತ್ರೆ, ಬನ್ನೂರು, ಮೈಸೂರು |
| 13. | ಡಾ: ಪುಷ್ಪಲತಾ ಸಿ. ವಿ., ಸಾರ್ವಜನಿಕ ಆಸ್ಪತ್ರೆ, ಗುಡಿಬಂಡೆ, ಕೋಲಾರ |
| 14. | ಡಾ: ಶಾಂತಲಾ ಕೆ. ಎಸ್. ಸಾರ್ವಜನಿಕ ಆಸ್ಪತ್ರೆ, ಕಾರ್ಕಳ, ಉಡುಪಿ ಜಿಲ್ಲೆ |
| 15. | ಡಾ: ನವೀನ್ ಸಿ. ಆರ್. ಸಾರ್ವಜನಿಕ ಆಸ್ಪತ್ರೆ, ತುರುವೇಕೆರೆ, ತುಮಕೂರು |
| 16. | ಡಾ: ಲೀಲಾ ನಾಡಗೌಡ, ಸಾರ್ವಜನಿಕ ಆಸ್ಪತ್ರೆ, ಹುಕ್ಕೇರಿ, ಬೆಳಗಾಂ |
| 17. | ಡಾ: ಶಶಿಕಿರಣ ಜೆ, ಸಾರ್ವಜನಿಕ ಆಸ್ಪತ್ರೆ, ಚನ್ನರಾಯಪಟ್ಟಣ, ಹಾಸನ |
| 18. | ಡಾ: ರಂಜನಿ ಕೆ. ವಿ. ಸಾರ್ವಜನಿಕ ಆಸ್ಪತ್ರೆ, ತಲಕಾಡು, ಮೈಸೂರು |
| 19. | ಡಾ: ಮುಷಾಕಿರ್ ಹುಸೇನ್, ಸಾರ್ವಜನಿಕ ಆಸ್ಪತ್ರೆ, ಶೃಂಗೇರಿ, ಚಿಕ್ಕಮಗಳೂರು ಜಿಲ್ಲೆ |
| 20. | ಡಾ: ಬಸವನಗೌಡ ಸಿ. ಪಾಟೀಲ್, ಸರ್ಕಾರಿ ದಂತ ಮಹಾವಿದ್ಯಾಲಯ, ಬೆಂಗಳೂರು (ಸ್ನಾತಕೋತ್ತರ ವ್ಯಾಸಂಗ) |
| 21. | ಡಾ: ನಿರ್ಮಲ ರೆಡ್ಡಿ, ಸಾರ್ವಜನಿಕ ಆಸ್ಪತ್ರೆ, ಸಿಂಧನೂರು, ರಾಯಚೂರು |
| 22. | ಡಾ: ಸುನಿಲ್ ಪೂಜಾರಿ ಸಾರ್ವಜನಿಕ ಆಸ್ಪತ್ರೆ, ಮುಧೋಳ್, ಬಾಗಲಕೋಟೆ ಜಿಲ್ಲೆ |
| 23. | ಡಾ: ಮಲ್ಲನ ಗೌಡ ಬಿ. ಪಿ. ಸಾರ್ವಜನಿಕ ಆಸ್ಪತ್ರೆ, ರಾಣೇಬೆನ್ನೂರು, ಹಾವೇರಿ |
| 24. | ಡಾ: ದಾಕ್ಷಾಯಿಣಿ ಟಿ. ಡಿ. ಸಾರ್ವಜನಿಕ ಆಸ್ಪತ್ರೆ, ಬ್ಯಾಡಗಿ ಹಾವೇರಿ ಜಿಲ್ಲೆ |
| 25. | ಡಾ: ಮಂಜುಳಾ ಎಂ. ಸಾರ್ವಜನಿಕ ಆಸ್ಪತ್ರೆ, ಯಳಂದೂರು, ಚಾಮರಾಜನಗರ ಜಿಲ್ಲೆ |
| 26. | ಡಾ: ಸುಮಾ ವೈ. ಸಾರ್ವಜನಿಕ ಆಸ್ಪತ್ರೆ, ಹೊಸದುರ್ಗ, ಚಿತ್ರದುರ್ಗ ಜಿಲ್ಲೆ |
| 27. | ಡಾ: ಅನಿಲ್ ಧಾವನ್ ಇ. ಸಾರ್ವಜನಿಕ ಆಸ್ಪತ್ರೆ, ಕುಶಾಲನಗರ, ಕೊಡಗು ಜಿಲ್ಲೆ |
| 28. | ಡಾ: ಶ್ರೀನಾಥ್ ಎಸ್. ಕೆ. ಸರ್ಕಾರಿ ದಂತ ಮಹಾವಿದ್ಯಾಲಯ, ಬೆಂಗಳೂರು |
| 29. | ಡಾ: ಮೋಹನ್ ಆರ್. ಸಕ್ರಿ, ಎಸ್‌ಡಿಎಂ ದಂತ ಕಾಲೇಜು, ಧಾರವಾಡ (ಸ್ನಾತಕೋತ್ತರ ವ್ಯಾಸಂಗ) |
| 30. | ಡಾ: ರೋಸಮ್ಮ ಜಾರ್ಜ್, ಸಾರ್ವಜನಿಕ ಆಸ್ಪತ್ರೆ, ಆಲೂರು, ಹಾಸನ ಜಿಲ್ಲೆ |
| 31. | ಡಾ: ಯೋಗೇಂದ್ರ ನಾಯ್ಕ ಜೆ. ಆರ್. ಜಿಲ್ಲಾ ಆಸ್ಪತ್ರೆ, ಚಿಕ್ಕಮಗಳೂರು |
| 32. | ಡಾ: ಶೋಭಾ ಕೆ. ಎಂ. ಜಿಲ್ಲಾ ಆಸ್ಪತ್ರೆ, ಚಿತ್ರದುರ್ಗ |
| 33. | ಡಾ: ರಶ್ಮಿ ಎಸ್. ಸಾರ್ವಜನಿಕ ಆಸ್ಪತ್ರೆ, ಸುಳ್ಯ, ಮಂಗಳೂರು |
| 34. | ಡಾ: ಜಗದೀಶ್ ಕೆ. ಸಾರ್ವಜನಿಕ ಆಸ್ಪತ್ರೆ, ಚಿಕ್ಕನಾಯಕನಹಳ್ಳಿ, ತುಮಕೂರು |
| 35. | ಡಾ: ಗಿರೀಶ್ ಜೆ. ಕೆ. ಸಾರ್ವಜನಿಕ ಆಸ್ಪತ್ರೆ, ಹೊಳೆನರಸೀಪುರ, ಹಾಸನ ಜಿಲ್ಲೆ |
| 36. | ಡಾ: ಲಕ್ಷ್ಮಣ ವಿ. ಎನ್. ಸಾರ್ವಜನಿಕ ಆಸ್ಪತ್ರೆ, ಚನ್ನಪಟ್ಟಣ, ಬೆಂಗಳೂರು ಗ್ರಾಮಾಂತರ ಜಿಲ್ಲೆ. |
| 37. | ಡಾ: ಸಂಜಯ್ ಸೀತಾರಾಮ ನಾಯ್ಕ್, ಸಾರ್ವಜನಿಕ ಆಸ್ಪತ್ರೆ, ಹೊನ್ನಾವರ, ಕಾರವಾರ |
| 38. | ಡಾ: ಪ್ರವೀಣ್ ಬಿ. ವಿ. ಸಾರ್ವಜನಿಕ ಆಸ್ಪತ್ರೆ, ತರೀಕೆರೆ, ಚಿಕ್ಕಮಗಳೂರು |
| 39. | ಡಾ: ವೆಂಕಟೇಶ್ ಎಸ್. ಸಾರ್ವಜನಿಕ ಆಸ್ಪತ್ರೆ, ಜಗಳೂರು, ದಾವಣಗೆರೆ ಜಿಲ್ಲೆ |

**ಕಾಶೀನಾಥ ಪಟವಾಡಿ**

ಪಿ. ಆರ್. 1537 ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ವಿಷಯ:** ಡಾ: ಎಸ್. ಪಂಪಾಪತಿ, ತಾಲ್ಲೂಕು ಆರೋಗ್ಯಾಧಿಕಾರಿ, ನಗರಸಭೆ, ಬಳ್ಳಾರಿ ಇವರನ್ನು ಸೇವೆಯಿಂದ ವಜಾ ಮಾಡುವ ಬಗ್ಗೆ.

**ಓದಲಾಗಿದೆ:**
1. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಅವರ ನೋಟೀಸ್ ಸಂಖ್ಯೆ: ಜಾಕೋ/ 13/ 2001-02, ದಿನಾಂಕ: 22-5-2001.
2. ಡಾ: ಎಸ್. ಪಂಪಾಪತಿ ರವರ ರಕ್ಷಣಾ ಹೇಳಿಕೆ ದಿನಾಂಕ: 12-3-2001.
3. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಆದೇಶ ಸಂಖ್ಯೆ: ಜಾಕೋ/ 13/ 2001-02, ದಿನಾಂಕ: 3-7-2001.

4. ಮುಖ್ಯ ಜಾಗೃತಾಧಿಕಾರಿ (ಜಾಕೋ), ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ವಿಚಾರಣಾ ವರದಿ ಸಂಖ್ಯೆ: ಮುಜಾಅ/ ಜಾಕೋ/ ಆ/ 16/ 2001-02, ದಿನಾಂಕ: 24-9-2001.
5. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಅವರ ತಿಳುವಳಿಕೆ ಪತ್ರ ಸಂಖ್ಯೆ: ಜಾಕೋ/ 13/ 2001-02, ದಿನಾಂಕ: 16-10-2001.
6. ಡಾ: ಎಸ್. ಪಂಪಾಪತಿ ರವರ ಪ್ರತಿ ರಕ್ಷಣಾ ಹೇಳಿಕೆ ದಿನಾಂಕ: 9-11-2001.

**ಪ್ರಸ್ತಾವನೆ:**

ಡಾ: ಎಸ್. ಪಂಪಾಪತಿ, ತಾಲ್ಲೂಕು ಆರೋಗ್ಯಾಧಿಕಾರಿ, ನಗರ ಸಭೆ, ಬಳ್ಳಾರಿ ಇವರು ಬೆಂಗಳೂರು ವೈದ್ಯಕೀಯ ಮಹಾ ವಿದ್ಯಾಲಯದಲ್ಲಿ ಸ್ನಾತಕೋತ್ತರ ವ್ಯಾಸಂಗ ಮಾಡುತ್ತಿದ್ದ ಸಮಯದಲ್ಲಿ ದಿನಾಂಕ: 13-8-1996 ರಿಂದ ಸ್ನಾತಕೋತ್ತರ ವ್ಯಾಸಂಗ ಮೊಟಕುಗೊಳಿಸಿ ಕರ್ತವ್ಯಕ್ಕೆ ಹಾಜರಾಗದೇ ದಿನಾಂಕ: 8-7-1998ರವರೆಗೆ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾಗಿದ್ದುದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು (1957ರ, ನಿಯಮ-11ರಡಿಯಲ್ಲಿ ಕಾರಣ ಕೇಳುವ ನೋಟೀಸನ್ನು ದೋಷಾರೋಪಣ ಪಟ್ಟಿಯೊಂದಿಗೆ ಮೇಲೆ (1)ರಲ್ಲಿ ಓದಲಾದ ಪತ್ರದ ಮೂಲಕ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಅವರು ಆರೋಪಿತ ವೈದ್ಯಾಧಿಕಾರಿಗೆ ಜಾರಿ ಮಾಡಿ ಅವರ ವಿರುದ್ಧ ಮಾಡಲಾಗಿರುವ ಆರೋಪಗಳ ಬಗ್ಗೆ ವಿವರಣೆ ಸಲ್ಲಿಸುವಂತೆ ಕೋರಲಾಗಿತ್ತು. ಆರೋಪಿತ ವೈದ್ಯಾಧಿಕಾರಿಯು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ರಕ್ಷಣಾ ಹೇಳಿಕೆ ಸಲ್ಲಿಸಿದ್ದು, ಹೇಳಿಕೆಯಲ್ಲಿ ನೀಡಿರುವ ಕಾರಣಗಳು ಸಮಂಜಸವಾಗಿರದಿದ್ದರಿಂದ ಈ ಪ್ರಕರಣವನ್ನು ಇಲಾಖಾ ವಿಚಾರಣೆಗೆ ವಹಿಸಲು ಆಯುಕ್ತರು, ಆರೋಗ್ಯ ಮತ್ತು ಕು. ಕ. ಸೇವೆಗಳು, ಬೆಂಗಳೂರು ಅವರು ತೀರ್ಮಾನಿಸಿ, ಮೇಲೆ (3)ರಲ್ಲಿ ಓದಲಾದ ತಮ್ಮ ಆದೇಶದಲ್ಲಿ ಮುಖ್ಯ ಜಾಗೃತಾಧಿಕಾರಿ (ಜಾಗೃತ ಕೋಶ), ಆರೋಗ್ಯ ಮತ್ತು ಕು. ಕ. ಸೇವೆಗಳು, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಆಡಳಿತಾಧಿಕಾರಿ (ಸಾಮಾನ್ಯ) ಆರೋಗ್ಯ ಮತ್ತು ಕು. ಕ. ಸೇವೆಗಳು, ಬೆಂಗಳೂರು ಅವರನ್ನು ಮಂಡನಾಧಿಕಾರಿಗಳನ್ನು ನೇಮಿಸಿ ವಿಚಾರಣೆ ನಡೆಸಿ, ವಿಚಾರಣಾ ವರದಿ ಸಲ್ಲಿಸುವಂತೆ ನಿರ್ದೇಶಿಸಿದ್ದರು.

ವಿಚಾರಣಾಧಿಕಾರಿಗಳು ನಿಯಮಾನುಸಾರ ವಿಚಾರಣೆ ನಡೆಸಿ ಮೇಲೆ (4)ರಲ್ಲಿ ಓದಲಾದ ಪತ್ರದ ಮೂಲಕ ವಿಚಾರಣಾ ವರದಿಯನ್ನು ಸಲ್ಲಿಸಿದ್ದು, ಆಪಾದಿತ ವೈದ್ಯಾಧಿಕಾರಿಯ ಮೇಲೆ ಮಾಡಲಾದ ಅನಧಿಕೃತ ಗೈರುಹಾಜರಿಯ ಆಪಾದನೆ ಸಾಬೀತಾಗಿರುತ್ತದೆ ಎಂಬ ನಿರ್ಣಯಕ್ಕೆ ಬಂದಿರುತ್ತಾರೆ. ಸದರಿ ವಿಚಾರಣಾ ವರದಿಯನ್ನು ಮೇಲೆ (5)ರಲ್ಲಿ ಓದಲಾದ ತಿಳುವಳಿಕೆ ಪತ್ರದ ಮೂಲಕ ಆಪಾದಿತ ವೈದ್ಯಾಧಿಕಾರಿಗೆ ಜಾರಿ ಮಾಡಿ ವಿಚಾರಣಾ ವರದಿಯನ್ನು ಏಕೆ ಅಂಗೀಕರಿಸಬಾರದೆಂಬ ಬಗ್ಗೆ ವಿವರಣೆ ಕೋರಲಾಗಿತ್ತು. ಆರೋಪಿತ ವೈದ್ಯಾಧಿಕಾರಿಯು ಮೇಲೆ (6)ರಲ್ಲಿ ಓದಲಾದ ಪತ್ರದ ಮೂಲಕ ಪತ್ರಿ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿದ್ದು ಅವರ ಪ್ರತಿ ರಕ್ಷಣಾ ಹೇಳಿಕೆಯಲ್ಲಿ ಪರಿಗಣಿಸುವಂತಹ ಯಾವುದೇ ಹೊಸ ಅಂಶಗಳು ಇರುವುದಿಲ್ಲ.

ಸರ್ಕಾರವು ವಿಚಾರಣಾಧಿಕಾರಿಗಳ ವಿಚಾರಣಾ ವರದಿಯನ್ನು ಸಂಬಂಧಿಸಿರುವ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಿದೆ. ಡಾ: ಎಸ್. ಪಂಪಾಪತಿ, ತಾಲ್ಲೂಕು ಆರೋಗ್ಯಾಧಿಕಾರಿ, ನಗರ ಸಭೆ, ಬಳ್ಳಾರಿ ಇವರು ಸ್ನಾತಕೋತ್ತರ ವ್ಯಾಸಂಗವನ್ನು ಮೊಟಕುಗೊಳಿಸಿ ದಿನಾಂಕ: 13-8-1996ರಿಂದ ದಿನಾಂಕ: 20-12-1999ರವರೆಗೆ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾಗಿದ್ದಾರೆ ಎಂಬ ಆರೋಪವನ್ನು ಹೊರಿಸಿ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಗಿದೆ. ವಿಚಾರಣಾಧಿಕಾರಿಗಳು ವರದಿಯನ್ನು ನೀಡಿ, ಆಪಾದಿತರು ದಿನಾಂಕ: 13-8-1996ರಿಂದ 8-6-1998ರವರೆಗೆ ಅಂದರೆ 1 ವರ್ಷ 11 ತಿಂಗಳು ಅನಧಿಕೃತ ಗೈರುಹಾಜರಾಗಿರುವುದಾಗಿ ಹಾಗೂ ದಿನಾಂಕ: 9-9-1998ರಿಂದ 4-12-1999ರವರೆಗೆ ನೇಮಕಾತಿ ನಿರೀಕ್ಷಣೆಗಾಗಿ ಕಾಯ್ದ ಅವಧಿಯನ್ನು ನೇಮಕಾತಿಗಾಗಿ ಕಾಯ್ದ ಅವಧಿ ಎಂದು ಪರಿಗಣಿಸಬೇಕೆಂದು ವರದಿ ನೀಡಿರುತ್ತಾರೆ.

ಈ ಬಗ್ಗೆ ಆಪಾದಿತರ ಅಹವಾಲನ್ನು ಪಡೆಯಲಾಗಿದೆ. ಆಪಾದಿತರು ತನ್ನ ಅಹವಾಲಿನಲ್ಲಿ ತನಗೆ ತೀವ್ರ ಅನಾರೋಗ್ಯದ ನಿಮಿತ್ತ ರಜೆ ಸಲ್ಲಿಸಿ ರಜೆಯನ್ನು ಮುಂದುವರೆಸಿರುತ್ತೇನೆಂದು ಹಾಗೂ ಜಿಲ್ಲಾ ಶಸ್ತ್ರ ಚಿಕಿತ್ಸಕರು ಮೇಲು ರುಜು ಮಾಡಿರುವ ಪ್ರಮಾಣ ಪತ್ರವನ್ನು ಸಲ್ಲಿಸಿರುತ್ತೇನೆಂದು ತಿಳಿಸಿರುತ್ತಾರೆ. ಅದಲ್ಲದೆ ಅನಾರೋಗ್ಯ ಕಾರಣ ಕರ್ತವ್ಯಕ್ಕೆ ಹಾಜರಾಗದೇ ಇದ್ದ ಅವಧಿಯನ್ನು ತನ್ನ ಹಕ್ಕಿನಲ್ಲಿರುವ ರಜೆ ಎಂದು ಪರಿಗಣಿಸಬೇಕಾಗಿ ಕೋರಿರುತ್ತಾರೆ.

ಆದರೆ ದಾಖಲೆಗಳನ್ನು ಪರಿಶೀಲಿಸಿದಾಗ ವ್ಯಕ್ತವಾಗುವ ಅಂಶವೇನೆಂದರೆ, ಸದರಿ ವೈದ್ಯರು ಉನ್ನತ ವ್ಯಾಸಂಗವನ್ನು ಮೊಟಕುಗೊಳಿಸಿ ದಿನಾಂಕ: 13-8-1996ರಿಂದ ಅನಧಿಕೃತ ಗೈರುಹಾಜರಾಗಿದ್ದಾರೆ. ತನ್ನ ಕೌಟುಂಬಿಕ ತೊಂದರೆಗಳಿಗೆ ಹಾಗೂ ತನ್ನ ತಾಯಿಯವರ ಆರೋಗ್ಯ ಹದಗೆಟ್ಟಿದ್ದರಿಂದ ಕರ್ತವ್ಯಕ್ಕೆ ಹಾಜರಾಗಲು ಆಗಲಿಲ್ಲವೆಂದು ತಿಳಿಸಿರುತ್ತಾರೆ. ವಿಚಾರಣೆಯ ಕಾಲದಲ್ಲಿ "ಮೇಲಾಧಿಕಾರಿಗಳಿಂದ ರಜೆ ಪಡೆಯದೆ ಸರ್ಕಾರಿ ಕೆಲಸಕ್ಕೆ ಗೈರುಹಾಜರಾಗಿರುವುದು ದುರ್ನಡತೆ ಅಲ್ಲವೆ?" ಎಂದು ಪಾಟೀ ಸವಾಲಿನಲ್ಲಿ ಕೇಳಿದ ಪ್ರಶ್ನೆಗೆ "ಹೌದು" ಎಂದು ಉತ್ತರ ನೀಡಿದ್ದಾರೆ. ತನ್ನ ಕೌಟುಂಬಿಕ ಕಾರಣದಿಂದ ಕರ್ತವ್ಯಕ್ಕೆ ಹಾಜರಾಗಲು ಸಾಧ್ಯವಾಗಲಿಲ್ಲವೆಂದು ತಿಳಿಸಿರುತ್ತಾರೆ. ಅದೇ ರೀತಿ ಕೆ. ಸಿ. ಎಸ್. ಆರ್. ನಿಯಮ -108ರ ಪ್ರಕಾರ 4 ತಿಂಗಳಿಗಿಂತ ಜಾಸ್ತಿ ಗೈರುಹಾಜರಾದಲ್ಲಿ, ಕೆಲಸದಿಂದ ವಜಾ ಮಾಡಲು ನಿಯಮವಿದೆ ಎಂಬುದು ಗೊತ್ತಿದೆಯೇ? ಎಂದು ಕೇಳಿದಾಗ, "ಗೊತ್ತಿದೆ" ಎಂದು ತಿಳಿಸಿರುತ್ತಾರೆ. ಆದರೆ ತನ್ನ ಕೌಟುಂಬಿಕ ಸಮಸ್ಯೆಗಳಿಂದ ಕೆಲಸಕ್ಕೆ ಹಾಜರಾಗಲು ಸಾಧ್ಯವಾಗಲಿಲ್ಲವೆಂದು ತಿಳಿಸಿರುತ್ತಾರೆ.

ಇದರಿಂದ ನಿಸ್ಸಂದೇಹವಾಗಿ ವ್ಯಕ್ತವಾಗುವ ಅಂಶವೇನೆಂದರೆ, ಆಪಾದಿತರು ಯಾವುದೇ ರಜಾ ಅರ್ಜಿಯನ್ನು ಸಲ್ಲಿಸದೇ, ತನ್ನ ಕೌಟುಂಬಿಕ ತೊಂದರೆಗಳನ್ನು ಮುಂದಿಟ್ಟು ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾಗಿದ್ದಾರೆ. ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾದರೆ ಅದನ್ನು ದುರ್ನಡತೆ ಎಂದು ಪರಿಗಣಿಸಲಾಗುತ್ತದೆ. ಹಾಗೂ ಸದರಿ ದುರ್ನಡತೆಗೋಸ್ಕರ ಕೆಲಸದಿಂದ ವಜಾ ಮಾಡಲು ಆಸ್ಪದವಿದೆ ಎಂದು ತಿಳಿದಿದ್ದರೂ ಸಹ ಇವರು ಕಾನೂನನ್ನು ಉಲ್ಲಂಘಿಸಿರುವುದು ವ್ಯಕ್ತವಾಗುತ್ತದೆ.

ಆದರೆ ಈಗ ಸದರಿ ವೈದ್ಯರು ತನಗೆ ಹುಷಾರಿಲ್ಲದ ನಿಮಿತ್ತ ತಾನು ಅನಾರೋಗ್ಯದಿಂದ ಬಳಲುತ್ತಿದ್ದರಿಂದ ಕರ್ತವ್ಯಕ್ಕೆ ಹಾಜರಾಗಲಿಲ್ಲ ಎಂದು ಹೊಸ ಸಬೂಬನ್ನು ನೀಡಿದ್ದಾರೆ. ಇದನ್ನು ಅವರು ವಿಚಾರಣೆ ಕಾಲದಲ್ಲಿ ತಿಳಿಸಿರುವುದಿಲ್ಲ. ಇದೊಂದು ಅವರ ನಂತರದ ಚಿಂತನೆ ಎಂಬುದು ಸ್ಪಷ್ಟವಾಗುತ್ತದೆ. ಅಲ್ಲದೆ ಇವರು 1996 ರಲ್ಲಿ ರಜೆ ಪಡೆದಿದ್ದರೂ ಸಹ, ದಿನಾಂಕ: 5-11-1997ರಂದು ವೈದ್ಯಾಧಿಕಾರಿಗಳಿಂದ ಪ್ರಮಾಣ ಪತ್ರ ಪಡೆದಿರುತ್ತಾರೆ. ಇದರಿಂದ ಸ್ಪಷ್ಟವಾಗುವ ಅಂಶವೇನೆಂದರೆ, ಕಾನೂನಿನ ದೃಷ್ಟಿಯಿಂದ ತಪ್ಪಿಸಿಕೊಳ್ಳಲು ಇವರು ಈ ರೀತಿ ಸಬೂಬು ನೀಡಿದ್ದಾರೆ ಎಂಬುದು ಸ್ಪಷ್ಟವಾಗುತ್ತದೆ. ವಿಚಾರಣಾ ಕಾಲದಲ್ಲಿ ಕೇವಲ ತನ್ನ ಕೌಟುಂಬಿಕ ಸಮಸ್ಯೆಗಳು ಇರುವ ಬಗ್ಗೆ ಮಾತ್ರ ಹೇಳಿರುತ್ತಾರೆ ವಿನಃ ತನಗೆ ಹುಷಾರಿಲ್ಲದ ಬಗ್ಗೆ ಚಕಾರ ಎತ್ತಿರುವುದಿಲ್ಲ. ವಿಚಾರಣಾ ಕಾಲದಲ್ಲಿ ಆಪಾದಿತರಿಗೆ ನೀಡಿದ ಸವಲತ್ತುಗಳನ್ನು ಉಪಯೋಗಿಸಿಕೊಳ್ಳದೇ ನಂತರ ದಾಖಲೆಗಳನ್ನು ಸಲ್ಲಿಸಿ ತಾನು ನಿರ್ದೋಷಿ ಎಂದು ಹೇಳುವ ಸಬೂಬನ್ನು ಒಪ್ಪಲು ಬರುವುದಿಲ್ಲ.

ಸರ್ಕಾರಿ ನೌಕರರು 4 ತಿಂಗಳಿಗಿಂತ ಜಾಸ್ತಿ ಅನಧಿಕೃತ ಗೈರುಹಾಜರಾದಲ್ಲಿ, ಅಂತಹವರನ್ನು ಸರ್ಕಾರಿ ಸೇವೆಯಿಂದ ತೆಗೆದುಹಾಕಲು ಆಸ್ಪದವಿದೆ. ಆಪಾದಿತರು ಕಾಲ ಕಾಲಕ್ಕೆ ರಜೆ ಅರ್ಜಿ ಸಲ್ಲಿಸಿದ್ದಾರೆ ಎಂಬ ನೆಪವನ್ನು ಇಂತಹ ಪ್ರಕರಣಗಳಲ್ಲಿ ಒಪ್ಪಲು ಬರುವುದಿಲ್ಲ ಎಂದು ಕರ್ನಾಟಕ ಆಡಳಿತ ನ್ಯಾಯಮಂಡಳಿಯು ತನ್ನ ಮೂರು ಸದಸ್ಯ ಪೀಠದ "ಡಾ: ಕೇಶವ ಮೂರ್ತಿ ಹಾಗೂ ರಾಜ್ಯ ಸರ್ಕಾರ" ಎಂಬ ತೀರ್ಪಿನಲ್ಲಿ ಸ್ಪಷ್ಟವಾಗಿ ತಿಳಿಸಿದೆ. ಈ ವೈದ್ಯರು ಸರ್ಕಾರಿ ಸೇವೆಗೆ ತನ್ನ ಇಚ್ಛಾನುಸಾರ ಬರಬಹುದು ಎಂಬ ಮನೋಭಾವ ತೋರಿಸಿ, ಅನಧಿಕೃತವಾಗಿ ಒಂದು ವರ್ಷ, 11 ತಿಂಗಳು ಸರ್ಕಾರಿ ಸೇವೆಗೆ ಗೈರುಹಾಜರಾಗಿದ್ದಾರೆ.

ಇವರ ಅನಧಿಕೃತ ಗೈರುಹಾಜರಿಯು ಸಂಪೂರ್ಣವಾಗಿ ಸಾಬೀತಾಗಿರುವುದಾಗಿ ವಿಚಾರಣಾಧಿಕಾರಿಗಳು ತಿಳಿಸಿರುವುದರಿಂದ ಹಾಗೂ ಆಪಾದಿತರು ಯಾವುದೇ ಒಪ್ಪತಕ್ಕಂತಹ ಕಾರಣಗಳನ್ನು ನೀಡದೇ ಇರುವುದರಿಂದ ಇವರು ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾಗಿರುವುದು ಸಂಪೂರ್ಣವಾಗಿ ಸಾಬೀತಾಗಿದೆ.

ಆದುದರಿಂದ ಇವರ ಅನಧಿಕೃತ ಗೈರುಹಾಜರಿಯನ್ನು ಗಂಭೀರವಾಗಿ ಪರಿಗಣಿಸಿ ಅವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ-8 (viii)ರನ್ವಯ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಲು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಆದೇಶ ಸಂಖ್ಯೆ: ಆಕುಕ 167 ಎಂಎಸ್ಎ 2002, ಬೆಂಗಳೂರು, ದಿನಾಂಕ: 11ನೇ ಡಿಸೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ-8 (viii)ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಡಾ: ಎಸ್. ಪಂಪಾಪತಿ, ಆರೋಗ್ಯಾಧಿಕಾರಿ, ನಗರ ಸಭೆ, ಬಳ್ಳಾರಿ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1538

**ಎಸ್. ಕೆ. ತೆಗ್ಗಿನಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಇಂಧನ ಸಚಿವಾಲಯ

**ವಿಷಯ:** ಮೆಸರ್ಸ್ ದೇವಿ ಟ್ರೇಡ್ ಲಿಂಕ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯ 8 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆಸರ್ಸ್ ಲಿಂಬಾವಳಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯ 7 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಗೆ ಸೇರಿಸಿ ಒಟ್ಟು 12 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆಸರ್ಸ್ ಲಿಂಬಾವಳಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರಿನಲ್ಲಿ ಅನುಷ್ಠಾನ ಮಾಡಲು ಅನುಮತಿ ನೀಡುವ ಬಗ್ಗೆ - ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಂಇ 317 ಎನ್‌ಸಿಇ 2002, ದಿನಾಂಕ: 12.3.2003.
2. ಸರ್ಕಾರಿ ಆದೇಶ ಸಂಖ್ಯೆ: ಇಂಇ 237 ಎನ್‌ಸಿಇ 2002, ದಿನಾಂಕ: 12-3-2003.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ /06/ ಲಿಂಬಾವಳಿ/ 2003/ 1909, ದಿನಾಂಕ: 10-12-2003.

**ಪ್ರಸ್ತಾವನೆ:**

ಮೆಸರ್ಸ್ ಲಿಂಬಾವಳಿ ಪವರ್ ಪ್ರೈವೇಟ್ ಲಿಮಿಟೆಡ್ ಈ ಕಂಪನಿಗೆ ಮಂಡ್ಯ ಜಿಲ್ಲೆಯ ಧನಗೂರು ಗ್ರಾಮದ ಹುಲ್ಲಹಳ್ಳ ಹೊಳೆಗೆ ಅಡ್ಡಲಾಗಿ 7 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ಹಂಚಿಕೆ ಮಾಡಲಾಗಿದೆ.

2. ಮೆಸರ್ಸ್ ದೇವಿ ಟ್ರೇಡ್ ಲಿಂಕ್ಸ್ ಪ್ರೈವೇಟ್ ಲಿಮಿಟೆಡ್ ಈ ಕಂಪನಿಗೆ ಮಂಡ್ಯ ಜಿಲ್ಲೆಯ ಮಂಡ್ಯ ತಾಲ್ಲೂಕಿನ ಶಿಂಷಾಪುರ ಗ್ರಾಮದ ಬಳಿ ವಿ. ವಿ. ಎನ್. ಎಲ್. ಹೈಡ್ರೋ ಪವರ್ ಜನರೇಷನ್ ಅಡಿಯಲ್ಲಿನ 170 ಕ್ಯೂಸೆಕ್ಸ್ ನೀರನ್ನು ಉಪಯೋಗಿಸಿ ಕಾವೇರಿ ನದಿಗೆ ಅಡ್ಡಲಾಗಿ 8 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಆದೇಶದಲ್ಲಿ ಹಂಚಿಕೆ ಮಾಡಲಾಗಿದೆ.

3. ಪ್ರಸ್ತುತ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರು ಮೆಸರ್ಸ್ ದೇವಿ ಟ್ರೇಡ್ ಲಿಂಕ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರಲ್ಲಿ ಈಗಾಗಲೇ ಹಂಚಿಕೆ ಆಗಿರುವ 8 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆಸರ್ಸ್ ಲಿಂಬಾವಳಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಂಚಿಕೆ ಆಗಿರುವ ಹುಲ್ಲಹಳ್ಳ ಕಿರು ಜಲ ವಿದ್ಯುತ್ ಯೋಜನೆಯೊಂದಿಗೆ ವಿಲೀನಗೊಳಿಸಿ ಅಂದರೆ, ವಿ.ವಿ.ಎನ್.ಎಲ್. ಪವರ್ ಜನರೇಷನ್‌ನಲ್ಲಿನ ನೀರನ್ನು ನೆಟಕಲ್ Balancing reservoir ನಲ್ಲಿ 170 ಕ್ಯೂಸೆಕ್ಸ್ ನೀರನ್ನು ಹಂಚಿಕೆ ಮಾಡಿ ಎಸ್ಕೇಪ್ ನಾಲೆಯ (Overflow ನಾಲೆ) ಮೂಲಕ ಹುಲ್ಲಹಳ್ಳ ಕಿರು ಜಲ ವಿದ್ಯುತ್ ಯೋಜನೆಗೆ ಸೇರಿಸಿ ಒಟ್ಟು 12 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆಸರ್ಸ್ ಲಿಂಬಾವಳಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರಿನಲ್ಲಿ ಅನುಷ್ಠಾನ ಮಾಡಲು ಆದೇಶವನ್ನು ಹೊರಡಿಸಲು ಸರ್ಕಾರಕ್ಕೆ ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ. ಇದರಿಂದ ಯೋಜನೆಯ ಅನುಷ್ಠಾನ ಶೀಘ್ರವಾಗಿ ಹಾಗೂ ಕಡಿಮೆ ವೆಚ್ಚದಲ್ಲಿ ಮಾಡಬಹುದಾಗಿದೆ ಎಂದೂ ತಿಳಿಸಿರುತ್ತಾರೆ. ಆದ್ದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 291 ಎನ್‌ಸಿಇ 2003, ಬೆಂಗಳೂರು, ದಿನಾಂಕ: 18ನೇ ಡಿಸೆಂಬರ್ 2003**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು, ಮೆಸರ್ಸ್ ದೇವಿ ಟ್ರೇಡ್ ಲಿಂಕ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಈಗಾಗಲೇ ಹಂಚಿಕೆ ಮಾಡಲಾಗಿರುವ 8 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆಸರ್ಸ್ ಲಿಂಬಾವಳಿ ಪವರ್ ಪ್ರೈವೇಟ್ ಲಿಮಿಟೆಡ್ ಈ ಕಂಪನಿಗೆ ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಹಂಚಿಕೆ ಮಾಡಲಾದ 7 ಮೆಗಾವ್ಯಾಟ್ ಸಾಮರ್ಥ್ಯದ ಹುಲ್ಲಹಳ್ಳ ಕಿರು ಜಲ ವಿದ್ಯುತ್ ಯೋಜನೆಯೊಂದಿಗೆ ವಿಲೀನಗೊಳಿಸಿ ಅಂದರೆ, ವಿ. ವಿ. ಎನ್. ಎಲ್. ಪವರ್ ಜನರೇಷನ್‌ನಲ್ಲಿನ ನೀರನ್ನು ನೆಟಕಲ್ Balancing reservoir ನಲ್ಲಿ 170 ಕ್ಯೂಸೆಕ್ಸ್ ನೀರನ್ನು ಹಂಚಿಕೆ ಮಾಡಿ ಎಸ್ಕೇಪ್ ನಾಲೆಯ (Overflow ನಾಲೆ) ಮೂಲಕ ಹುಲ್ಲಹಳ್ಳ ಕಿರು ಜಲ ವಿದ್ಯುತ್ ಯೋಜನೆಗೆ ಸೇರಿಸಿ ಒಟ್ಟು 12 ಮೆಗಾ ವ್ಯಾಟ್ ಸಾಮರ್ಥ್ಯದ ಒಂದೇ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆಸರ್ಸ್ ಲಿಂಬಾವಳಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರಿನಲ್ಲಿ ಅನುಷ್ಠಾನ ಮಾಡಲು ಅನುಮತಿಯನ್ನು ನೀಡಲಾಗಿದೆ. ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1539

**ಕೆ. ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಸರ್ಕಾರಿ ರೇಷ್ಮೆ ಕಾರ್ಖಾನೆಗಳನ್ನು ವಿಲೀನಗೊಳಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ವಾಕೈ 31 ರೇಕೃವಿ 98, ದಿನಾಂಕ: 20.5.2003

2. ಪತ್ರ ಸಂಖ್ಯೆ: ರೇಉಕೋ: ತಾಂತ್ರಿಕ : ರೇಕಾವಿ: 01-02, ದಿನಾಂಕ: 03-12-2003.

**ಪ್ರಸ್ತಾವನೆ:**

ರೇಷ್ಮೆ ಇಲಾಖೆಯ ವ್ಯಾಪ್ತಿಯಲ್ಲಿನ ಕೊಳ್ಳೇಗಾಲ, ಸಂತೇಮರಹಳ್ಳಿ, ಚಾಮರಾಜನಗರ ಹಾಗೂ ಮಾಂಬಳ್ಳಿ, ಇಲ್ಲಿನ ಸರ್ಕಾರಿ ರೇಷ್ಮೆ ಕಾರ್ಖಾನೆಗಳನ್ನು ಈ ಕೆಳಗಿನಂತೆ ವಿಲೀನಗೊಳಿಸಲು ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಸೂಚಿಸಲಾಗಿತ್ತು.

1. ಸರ್ಕಾರಿ ರೇಷ್ಮೆ ಕಾರ್ಖಾನೆ, ಚಾಮರಾಜನಗರ ಇದನ್ನು ಸರ್ಕಾರಿ ರೇಷ್ಮೆ ಕಾರ್ಖಾನೆ, ಸಂತೇಮರಹಳ್ಳಿ ಘಟಕದಲ್ಲೂ,
2. ಸರ್ಕಾರಿ ರೇಷ್ಮೆ ಕಾರ್ಖಾನೆ, ಕೊಳ್ಳೇಗಾಲ ಇದನ್ನು ಸರ್ಕಾರಿ ರೇಷ್ಮೆ ಕಾರ್ಖಾನೆ, ಮಾಂಬಳ್ಳಿ ಘಟಕದಲ್ಲೂ ಹಾಗೂ
3. ಸರ್ಕಾರಿ ರೇಷ್ಮೆ ಹುರಿ ಮತ್ತು ನೇಯ್ಗೆ ಕಾರ್ಖಾನೆ ಮುಡಿಗುಂಡಂ ಘಟಕವನ್ನು ಮುಚ್ಚಿ, ಇಲ್ಲಿನ ಸಿಬ್ಬಂದಿ: ಕಾರ್ಮಿಕರನ್ನು ಮಾಂಬಳ್ಳಿ ಮತ್ತು ಸಂತೇಮರಹಳ್ಳಿ ಕಾರ್ಖಾನೆಗಳಿಗೆ ಮರು ಹಂಚಿಕೆ ಮಾಡಿ ವಿಲೀನಗೊಳಿಸುವುದು.

ಆ ಸಂಬಂಧ, ಕೈಗಾರಿಕಾ ವಿವಾದಗಳ ಅಧಿನಿಯಮ (1947)ರ ಅಡಿ ಕಾರ್ಮಿಕ ಸಂಘ: ಒಕ್ಕೂಟಗಳಿಗೆ 90 ದಿನಗಳ ಮುಂಚಿತವಾಗಿ ನೋಟೀಸು ನೀಡಬೇಕಾಗಿರುವುದರಿಂದ, ವಿಲೀನಗೊಳಿಸುವ ದಿನಾಂಕವನ್ನು ಸೂಚಿಸುವಂತೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 31 ರೇಕೃವಿ 98, ಬೆಂಗಳೂರು, ದಿನಾಂಕ: 20ನೇ ಡಿಸೆಂಬರ್, 2003**

ಆದೇಶ ಸಂಖ್ಯೆ: ವಾಕೈ 31 ರೇಕೃವಿ 98, ದಿನಾಂಕ: 20.05.2003ರಲ್ಲಿ ಸೂಚಿಸಿರುವ ರೇಷ್ಮೆ ಕಾರ್ಖಾನೆಗಳ ವಿಲೀನದ ದಿನಾಂಕವನ್ನು ದಿನಾಂಕ: 31.03.2004 ಎಂಬುದಾಗಿ ನಿಗದಿಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1541

**ಮಂಚೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ರೇಷ್ಮೆ).